# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 09

ಸದಸ್ಯರ ಹೆಸರು : ಶ್ರೀ ಶರಣಪ್ಪ ಮಟ್ಟೂರ (ಶಿಕ್ಷಕರ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 16/07/2019.

ಉತ್ತರಿಸಬೇಕಾದ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ಪಬ್ಲಿಕ್ ಶಾಲೆಗಳಲ್ಲಿ ಹಣಕಾಸು ನಿರ್ವಹಣಾಧಿಕಾರಿ ಯಾರು; ಅವರು ಯಾರ ಮೇಲ್ವಿಚಾರಣೆಗೆ ಒಳಪಡುತ್ತಾರೆ; | ಕರ್ನಾಟಕ ಪಬ್ಲಿಕ್ ಶಾಲೆಯಲ್ಲಿನ ಪದವಿ ಪೂರ್ವ ಕಾಲೇಜು ವಿಭಾಗದ ಕಾರ್ಯನಿರತ ಪ್ರಾಂಶುಪಾಲರು ಆಡಳಿತಾತ್ಮಕವಾಗಿ ಮತ್ತು ಶೈಕ್ಷಣಿಕವಾಗಿ ಶಾಲೆಯ ಮುಖ್ಯಸ್ಥರಾಗಿರುತ್ತಾರೆ ಇವರು ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಯೂ (ಡಿಡಿಓ) ಆಗಿದ್ದು, ಪ್ರಾಂಶುಪಾಲರೇ ಪ್ರಮುಖ ಹಣಕಾಸು ನಿರ್ವಹಣಾಧಿಕಾರಿಯಾಗಿರುತ್ತಾರೆ.<br>ಜಿಲ್ಲಾ ಹಂತದಲ್ಲಿ ಉಪನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಉಪನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಇವರು ಮೇಲ್ವಿಚಾರಣಾ ಅಧಿಕಾರಿಯಾಗಿರುತ್ತಾರೆ.<br>ತಾಲ್ಲೂಕು ಹಂತದಲ್ಲಿ ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳು ಮೇಲ್ವಿಚಾರಣೆ ಮತ್ತು ಅನುಪಾಲನಾ ಅಧಿಕಾರಿಗಳಾಗಿರುತ್ತಾರೆ. |
| ಆ) | ಸಮಗ್ರ ಶಿಕ್ಷಣ ಅಭಿಯಾನದಲ್ಲಿ ಡಿಡಿಪಿಐಗಳ ಪಾತ್ರವೇನು? | ಸಮಗ್ರ ಶಿಕ್ಷಣ ಕರ್ನಾಟಕ ಯೋಜನೆಯಲ್ಲಿ ಜಿಲ್ಲಾ ಉಪನಿರ್ದೇಶಕರು ಪದನಿಮಿತ್ತ ಜಿಲ್ಲಾ ಯೋಜನಾ ಸಮನ್ವಯಾಧಿಕಾರಿಗಳಾಗಿರುತ್ತಾರೆ. ಸದರಿಯವರು ಯೋಜನೆ ತಯಾರಿಕೆಯಿಂದ ಯೋಜನೆಯ ಪರಿಣಾಮಕಾರಿ ಅನುಷ್ಠಾನ ಹಾಗೂ ಮೇಲುಸ್ತುವಾರಿಯ ಸಂಪೂರ್ಣ ಜವಾಬ್ದಾರಿಯನ್ನು ಹೊಂದಿರುತ್ತಾರೆ. |

**ಸಂಖ್ಯೆ: ಇಪಿ 55 ವೈ.ಎಸ್.ಕೆ 2019**

(ಎಸ್.ಆರ್.ಶ್ರೀನಿವಾಸ್)

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು